ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ಉಪ ವಿಭಾಗಾಧಿಕಾರಿ ತಹಶೀಲ್ದಾರ ರವರ ಜವಾಬ್ದಾರಿಗಳ ಬಗ್ಗೆ

ಶ್ರೀ ಎಸ್.ಎಲ್. ಭೋಜೇಗೌಡ ( ಶಿಕ್ಷಕರ ಕ್ಷೇತ್ರ):-

171 (248) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿರುವ ಉಪ ವಿಭಾಗಾಧಿಕಾರಿಗಳು ಮತ್ತು ತಹಶೀಲ್ದಾರರ ಕಛೇರಿಗಳ ಸಂಖ್ಯೆ ಎಷ್ಟು; ಸದರಿ ಕಛೇರಿಗಳಿಗೆ ಮಂಜೂರಾತಿಯಾಗಿರುವ ಹುದ್ದೆಗಳ ಸಂಖ್ಯೆ ಎಷ್ಟು; ಕೊರತೆಯಿರುವ ಹುದ್ದೆಗಳ ಸಂಖ್ಯೆ ಎಷ್ಟು ; ಕೊರತೆಯಿರುವ ಹುದ್ದೆಗಳನ್ನು ಯಾವಾಗ ಭರ್ತಿಮಾಡಲಾಗುವುದು ; (ಜಿಲ್ಲಾವಾರು, ಹುದ್ದೆವಾರು ವಿವರ ನೀಡುವುದು)

(ಆ) ಉಪವಿಭಾಗಾಧಿಕಾರಿ ಮತ್ತು ತಹಶೀಲ್ದಾರರವರಿಗೆ ಅರೆ ನ್ಯಾಯಿಕ ಅಧಿಕಾರವನ್ನು ಪ್ರದತ್ತ ಮಾಡುವ ಕಾಯ್ದೆಗಳು ಯಾವುವು; (ಕಾಯ್ದೆವಾರು ವಿವರ ನೀಡುವುದು)

(ಇ) ಉಪವಿಭಾಗಾಧಿಕಾರಿ ಮತ್ತು ತಹಶೀಲ್ದಾರರವರು ಅಧ್ಯಕ್ಷರು ಸದಸ್ಯ ಕಾರ್ಯದರ್ಶಿ ಸದಸ್ಯರಾಗಿರುವ ಸಮಿತಿಗಳು ಯಾವುವು; ಇವರು ಯಾವ ಯಾವ ಇಲಾಖೆಗಳ ಯಾವ ಯಾವ ಸಮಿತಿಗಳಿಗೆ ಅಧ್ಯಕ್ಷರಾಗಿರುತ್ತಾರೆ ; ಇವರು ವಾರ್ಷಿಕವಾಗಿ ಕನಿಷ್ಟ ಭಾಗವಹಿಸಬೇಕಾದ ಸಮಿತಿ ಸಭೆಗಳ ಸಂಖ್ಯೆ ಎಷ್ಟು ? (ಅವುಗಳಲ್ಲಿ ಕಾರ್ಯನಿರ್ವಹಿಸಲು ಇರುವ ಮಾರ್ಗಸೂಚಿ ಸುತ್ತೋಲೆಯ ಪ್ರತಿಯನ್ನು ಒದಗಿಸುವುದು)